ಡಾ|| ಜಿ. ಎಂ. ನಾಗಯ್ಯ*

# ವಡ್ಡಾರಾಧನೆ ಸೂಚಿಸುವ ಬಸದಿ ಮತ್ತು ಸೊಂಡೂರು

ಉಪಲಬ್ಧ ಪ್ರಥಮ ಕನ್ನಡ ಗದ್ಯಕೃತಿಯೆಂಬ ಖ್ಯಾತಿವೆತ್ತ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯಲ್ಲಿ ಕಾರ್ತಿಕ ಋಷಿಯ ಕಥೆ ಬರುತ್ತದೆ. ಲಾಳದೇಶದ ಅಗ್ನಿರಾಜನು ತನ್ನ ಪುತ್ರಿ ಕೃತ್ತಿಕೆಯನ್ನು ವಿವಾಹವಾಗಿ ಕಾರ್ತಿಕ ಮತ್ತು ವೀರಶ್ರೀಯೆಂಬ ಪುತ್ರ ಪುತ್ರಿಯರನ್ನು ಪಡೆಯುತ್ತಾನೆ. ವೀರಶ್ರೀಯನ್ನು ಕೋಗಳಿಯ ಅರಸು ಕ್ರೌಂಚನು ವಿವಾಹವಾಗುತ್ತಾನೆ. ಕಾರ್ತಿಕನಿಗೆ ತನ್ನ ತಂದೆ ಮತ್ತು ಅಜ್ಜ ಒಬ್ಬನೇ ಎಂದು ತಿಳಿದು ಜಿಗುಪ್ಸೆಗೊಂಡು ತಪಸ್ಸನ್ನಾಚರಿಸಲು ಹೋಗುತ್ತಾನೆ. ಕಿಷ್ಕಿಂದ ಪರ್ವತದಲ್ಲಿ ತಪಸ್ಸನ್ನಾಚರಿಸಿ ಸಂಚರಿಸುತ್ತಾ ಕೋಗಳಿಗೆ ಬರುತ್ತಾನೆ. ಅವನ ಸಹೋದರಿ ವೀರಶ್ರೀ ಕಾರ್ತಿಕನ ಕಾಲು ಹಿಡಿದು ಅರಮನೆಗೆ ಭಿಕ್ಷೆಗೆ ಬರಬೇಕೆಂದು ಕೇಳಿಕೊಳ್ಳುತ್ತಿರುತ್ತಾಳೆ. ಈ ದೃಶ್ಯವನ್ನು ನೋಡಿದ ಕ್ರೌಂಚನು ನಿತ್ಯವೂ ನನ್ನನ್ನು ಬಿಟ್ಟು ಈ ಸವಣನಲ್ಲಿಗೆ ಹೋಗುತ್ತಿದ್ದಾಳೆಂದು ತಪ್ಪಾಗಿ ಭಾವಿಸಿ ಸಿಟ್ಟಿನಿಂದ ಶಕ್ತಿಯೆಂಬ ಆಯುಧದಿಂದ ಕಾರ್ತಿಕ ಋಷಿಯನ್ನು ಇರಿದು ವೀರಶ್ರೀಯನ್ನು ಎಳೆದುಕೊಂಡು ಹೋಗುತ್ತಾನೆ. ಕಾರ್ತಿಕ ಋಷಿಯ ಅಜ್ಜಿ ವೀರಮತಿ ಮಹಾದೇವಿ 'ವ್ಯಂತರ ದೇವತೆ'ಯಾಗಿ ಹುಟ್ಟಿದ್ದು ಆಕೆ ನವಿಲು ರೂಪ ಧರಿಸಿ ತನ್ನ ಬೆನ್ನ ಮೇಲೆ ಕಾರ್ತಿಕ ಋಷಿಯನ್ನು ಕೂಡಿಸಿಕೊಂಡು "ಕೋಗಳಿಯ ಮೂಡಣದೆಸೆಯ ಪರ್ವತದ ಕೊಳದ ತಡಿಯೊಳ್ ಲತಾಮಂಟಪದೊಳಿರಿಸಿ" ಹೋಗುತ್ತಾಳೆ. "ಪೋದೊಡೆ ಬೆಟ್ಟದ ಮೇಗಣಿಂ ಪಾಯ್ವಪರ್ವ ನಿರ್ಝರ ಶೀಕರಂಗಳಿಂ ಮೆಯ್ಯಾಪ್ಯಾಯಮಾನಮಾಗಿ ಸಂನಸನಂಗೆಯ್ದು ಶುಭಪರಿಣಾಮದಿಂ ಮುಡಿಪಿ" ಅಲ್ಲಿಯೇ ತಪಸ್ಸನ್ನಾಚರಿಸಿ ಕಾರ್ತಿಕ ಋಷಿ ಮರಣವಪ್ಪುತ್ತಾನೆ. ಆ ಜಾಗದಲ್ಲಿಯೇ ವೀರಶ್ರೀ ಬಸದಿಯೊಂದನ್ನು ಮಾಡಿಸುತ್ತಾಳೆ. "ಸ್ವಾಮಿ ಕಾರ್ತಿಕ ಋಷಿಯರ್ ಮುಡುಪಿದಲ್ಲಿ ಯವರ ತಂಗಿಯಪ್ಪ ವೀರಶ್ರೀ ಬಸದಿಯಂ ಮಾಡಿದೊಡಂ ದಿಂದಿತ್ತ ಸ್ವಾಮಿಯೆಂಬ ತೀರ್ಥಮಾಯ್ತು" ಆ ಬಸದಿಯ ಸ್ಥಳ ಯಾವುದೆಂದು ಇಲ್ಲಿಯ ಪ್ರಶ್ನೆ.

ಡಾ|| ಡಿ. ಎಲ್. ನರಸಿಂಹಾಚಾರ್[1] ಅವರು "ಬಳ್ಳಾರಿ ಜಿಲ್ಲೆಯ ಸೊಂಡೂರಿನ ಬಳಿ ಬೆಟ್ಟಗಳಲ್ಲಿ ಈಗ ಕುಮಾರಸ್ವಾಮಿ ದೇವಾಲಯವಿರುವುದು ಪ್ರಸಿದ್ಧವಾಗಿದೆ....ಕಥೆಯಲ್ಲಿನ ಸ್ವಾಮಿ ಕಾರ್ತಿಕೇಯ ಯತಿ ಕುಮಾರಸ್ವಾಮಿಯೆಂಬ ದೇವರಾಗಿಯೂ ಆ ಬಸದಿಯೇ ಅನ್ಯ ದೇವಾಲಯವಾಗಿಯೂ ಪರಿವರ್ತನೆಗೊಂಡಿರಬಹುದು. ಈ ಭೂಸನ್ನಿವೇಶವೆಲ್ಲ ಕೋಗಳಿಯ ಪೂರ್ವಕ್ಕೆ ಇರುವ ಪರ್ವತಪ್ರಾಂತವಾಗಿದೆ" ಎಂದು ಹೇಳಿದ್ದಾರೆ. ಕುಮಾರಸ್ವಾಮಿ ದೇವಾಲಯ (ಕ್ರಿ. ಶ. ೭೧೯) ಹಿಂದೆ ಬಸದಿಯಾಗಿತ್ತೆಂಬುದಕ್ಕೆ ಯಾವುದೇ ಆಧಾರಗಳು ಇಲ್ಲ. ೮ನೆಯ ಶತಮಾನಕ್ಕಾಗಲೇ ಇದು ಶೈವ ಕ್ಷೇತ್ರವಾಗಿ ಪ್ರಸಿದ್ಧಿ ಪಡೆದಿತ್ತು. ಇದರ ಪಕ್ಕದಲ್ಲಿ

* ಸಹಾಯಕ ಗ್ರಂಥಪಾಲರು, ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ-೫೮೩ ೧೧೯, ತಾ ; ಸೊಂಡೂರು, ಜಿ : ಬಳ್ಳಾರಿ.

1 ನರಸಿಂಹಾಚಾರ್, ಡಿ. ಎಲ್., (ಸಂ.) ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ, ಮೈಸೂರು, ೧೯೮೬, ಪೀಠಿಕೆ ಪು. ೩೫.

ಮೂರ್ತಿ ದೇವಾಲಯ ಇಷ್ಟು ಪ್ರಾಚೀನ ; ಇಲ್ಲಿಲ್ಲ ಶೈವದ ಚಿಹ್ನೆಗಳೇ ಗೋಚರಿಸುತ್ತವೆ. ಜೈನಧರ್ಮದ ಕುರುಹುಗಳಾವುವೂ ಇಲ್ಲಿ ಇಲ್ಲ. ಅಲ್ಲದೆ ಕಥೆಯಲ್ಲಿ ಹೇಳುವ ಹಾಗೆ ಪರ್ವತದ ಕೊಳದ ತಡಿಯ ಪ್ರದೇಶವೂ ಅಲ್ಲ. ಡಾ. ಎಚ್. ದೇವೀರಪ್ಪನವರು[2] ವೀರಶ್ರೀ ಕಟ್ಟಿಸಿದ ಬಸದಿಯ ಸ್ಥಳವು ಈಗಿನ ಸುಬ್ಬರಾಯನಹಳ್ಳಿಗೆ ಸಮೀಪವಿರುವ ನವಿಲುಸ್ವಾಮಿ ದೇವಾಲಯವೆಂದು ಹೇಳುತ್ತಾರೆ. ಆದರೆ ಈ ದೇವಾಲಯ ವಿಜಯನಗರ ಅರಸರು ಕಟ್ಟಿಸಿರುವ ದೇವಾಲಯಗಳಂತೆ ಇದೆ. ಅಲ್ಲದೆ ಇದರ ಮುಂದಿರುವ ಹೊಂಡವನ್ನು ಬುಕ್ಕರಾಯನು ಮಾಡಿಸಿದನೆಂದೂ ಅಲ್ಲಿಯ ಶಾಸನ ಸ್ಪಷ್ಟವಾಗಿ ತಿಳಿಸುತ್ತದೆ. ಅಲ್ಲದೆ ಇಲ್ಲೂ ಜೈನಧರ್ಮದ ಚಿಹ್ನೆಗಳಾವುವೂ ಗೋಚರಿಸುವುದಿಲ್ಲ. ಹೀಗಾಗಿ ಈ ದೇವಾಲಯವೂ ಇತ್ತೀಚಿನದು.

ಇಷ್ಟು ಹಿನ್ನೆಲೆಯಲ್ಲಿ ಬಸದಿಯ ಕುರುಹುಗಳನ್ನು ಬೇರೆಡೆಗೆ ಹುಡುಕುತ್ತಿರುವಾಗ ನಂದಿಹಳ್ಳಿಯ ಹಿರಿಯರಿಂದ ಅಮೂಲ್ಯವಾದ ಮಾಹಿತಿ ದೊರೆಯಿತು. ಕುಮಾರಸ್ವಾಮಿ ಬೆಟ್ಟದ ಕೆಳಭಾಗದಲ್ಲಿ ನಂದಿಹಳ್ಳಿಗೆ ಪಶ್ಚಿಮಕ್ಕೆ ಇರುವ ಜೋಗಿಕೊಳ್ಳವನ್ನು ಜೋಗಪ್ಪನ ಕೊಳ್ಳವೆಂದೂ ಕರೆಯುತ್ತಿದ್ದರು. ಅಲ್ಲೊಂದು ಜೋಗಪ್ಪನ ಮೂರ್ತಿ ಇತ್ತು. ಆ ಮೂರ್ತಿಯನ್ನು ಮಳೆ ಬಾರದೆ ಇದ್ದಾಗ ಬೋರಲು ಮಲಗಿಸಿ ಮಳೆ ಬಂದ ತಕ್ಷಣ ಯಥಾಪ್ರಕಾರ ನಿಲ್ಲಿಸಿ ಪೂಜೆ ಸಲ್ಲಿಸುತ್ತಿದ್ದುದಾಗಿ ತಿಳಿಸಿದರು. ಆ ಮೂರ್ತಿ ಈಗ ಅಲ್ಲಿಲ್ಲ. ಸುಮಾರು ೨೦ ವರ್ಷಗಳ ಹಿಂದೆ ಅದನ್ನು ಯಾರೋ ಅಪಹರಿಸಿಕೊಂಡು ಹೋಗಿದ್ದಾರೆ. ಆ ಜೋಗಪ್ಪನ ಮೂರ್ತಿಯ ಗುಣಲಕ್ಷಣಗಳನ್ನು ವಿಚಾರಿಸಿದಾಗ ಅದು ಸುಮಾರು ಎರಡೂವರೆ ಅಡಿ ಎತ್ತರವಿದ್ದು ಪುರುಷ ವಿಗ್ರಹವಾಗಿದ್ದು ನಿಂತಿರುವ ದಿಗಂಬರಮೂರ್ತಿಯಾಗಿತ್ತೆಂಬ ಅಂಶಗಳು ತಿಳಿದು ಬಂದವು. ಈ ಅಂಶಗಳು ಜೈನ ವಿಗ್ರಹವನ್ನು ಹೋಲುತ್ತಿರುವುದರಿಂದ ನಿಂತ ಜೈನ ದಿಗಂಬರ ಮೂರ್ತಿಗಳ ಫೋಟೋವನ್ನು ತೋರಿಸಿದಾಗ ಜೋಗಪ್ಪನ ಮೂರ್ತಿ ಇದೇ ರೀತಿ ಇತ್ತೆಂದು ತಿಳಿಸಿ, ಮೂರ್ತಿಯ ಹಿಂದೆ ಯಾವುದೇ ರೀತಿಯ ಪ್ರಭಾವಳಿ ಇರಲಿಲ್ಲವೆಂದು ತಿಳಿಸಿದರು. ಹೀಗಾಗಿ ಇಂದು ಜೋಗಿಕೊಳ್ಳವೆಂದು ಕರೆಯುತ್ತಿರುವುದೇ ಕಥೆಯಲ್ಲಿ ಬರುವ ಬಸದಿಯ ಪ್ರದೇಶವಾಗಿರಬೇಕು. ಜೋಗಪ್ಪನ ಮೂರ್ತಿಯಿದ್ದ ಜೋಗಿಕೊಳ್ಳದ ಪ್ರದೇಶವು ಕಥೆಯಲ್ಲಿ ನಿರೂಪಿಸಿದಂತೆ ಕೋಗಳಿಯ ಪೂರ್ವಕ್ಕೆ ಬರುತ್ತದೆ. ಅಲ್ಲದೆ ಇದು ಪರ್ವತದ ಕೊಳದ ತಡಿಯ ಪ್ರದೇಶವೂ ಆಗಿದೆ. ಬೆಟ್ಟದ ಮೇಲಿನಿಂದ ಎಂಥ ಕಡು ಬೇಸಿಗೆಯಲ್ಲೂ ಸದಾ ನೀರು ಹರಿದು ಬರುವ ಕೊಳ್ಳದ ಪ್ರದೇಶವಾಗಿದ್ದು ಈಗಲೂ ಅತ್ಯಂತ ತಂಪಿನಿಂದ ಕೂಡಿದ ಸ್ಥಳವಾಗಿದೆ. ಕಾರ್ತಿಕ ಋಷಿಯ ಕಥೆಯಲ್ಲಿ ವರ್ಣಿಸಿರುವಂತೆಯೇ ಈ ಪ್ರದೇಶವಿದೆ. ಅಲ್ಲದೆ ಈ ಕೊಳ್ಳದ ನೀರು ಪವಿತ್ರವೆಂಬ ಭಾವನೆ ಇಂದಿಗೂ ಇದೆ. ಕುಷ್ಠರೋಗಿಗಳು ಈ ನೀರನ್ನು ದಿನಂಪ್ರತಿ ಸೇವಿಸಿದರೆ ರೋಗ ಪರಿಹಾರವಾಗುವುದೆಂಬ ನಂಬಿಕೆಯೂ ಇದೆ. ವಡ್ಡಾರಾಧನೆಯಲ್ಲಿಯೂ ಈ ಸ್ಥಳದ ನೀರಿನಿಂದ ರೋಗ ಪರಿಹಾರವಾಗುತ್ತದೆಂಬ ಉಲ್ಲೇಖವಿದ್ದುದನ್ನು ಇಲ್ಲಿ ನೆನೆಯಬೇಕು.

ಜೋಗಿಕೊಳ್ಳದ ಜೋಗಪ್ಪನ ಮೂರ್ತಿಯಿದ್ದ ಪ್ರದೇಶದಲ್ಲಿ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ದೇವಾಲಯದ ಅವಶೇಷಗಳು, ಕಲ್ಲಿನ ಕಂಬಗಳು ಇತ್ತೀಚೆಗೆ ಕಂಡು ಬಂದಿವೆ. ಇವೆಲ್ಲ ಹಿಂದೆ ಮಣ್ಣಿನಿಂದ ಮುಚ್ಚಿಹೋಗಿದ್ದು ಮಳೆಯನೀರು ರಭಸವಾಗಿ ಹರಿದು ಮಣ್ಣು ಕೊಚ್ಚಿಕೊಂಡು ಹೋಗಿದ್ದುದರಿಂದ ಈ ಅವಶೇಷಗಳು ಹೊರಬಿದ್ದಿವೆ. ಇಲ್ಲಿ ದೊರೆತ ಇಟ್ಟಿಗೆಗಳು ಪ್ರಾಚೀನ ಕಾಲದಲ್ಲಿ ಬಳಸುತ್ತಿದ್ದ ಇಟ್ಟಿಗೆಗಳನ್ನು ಹೋಲುತ್ತವೆ. ಇವುಗಳ ಅಳತೆ ಒಂದು ಅಡಿ ಎಂಟೂವರೆ ಇಂಚು ಉದ್ದ ಎಂಟೂವರೆ ಇಂಚು ಅಗಲ ಹಾಗೂ ನಾಲ್ಕು ಇಂಚು ದಪ್ಪಗಿವೆ. ಇಲ್ಲಿ ನಿರ್ಮಿಸಲ್ಪಟ್ಟಿದ್ದ ದೇವಾಲಯ ಕ್ರಿ.ಶ. ೧೦ನೇ ಶತಮಾನಕ್ಕೆ ಸಂಬಂಧ ಪಟ್ಟಿರಬೇಕು. ಈ ಅವಶೇಷಗಳ ಅಡಿಯಲ್ಲಿ ಕಲ್ಲಿನಿಂದ ಕೆತ್ತಲ್ಪಟ್ಟ ಸ್ತ್ರೀ ದೇವತೆಯ ವಿಗ್ರಹ ದೊರೆತಿದೆ. ಇದು ವಡ್ಡಾರಾಧನೆಯಲ್ಲಿ ಬರುವ ವ್ಯಂತರ ದೇವತೆಯ ಮೂರ್ತಿಯಾಗಿರಬೇಕು. ಕಥೆಯಲ್ಲಿ ವೀರಮತಿ ಮಹಾದೇವಿ ವ್ಯಂತರ

---

2 ದೇವೀರಪ್ಪ ಎಚ್. : ಶಿವಕೋಟ್ಯಾಚಾರ್ಯನ ಕಾಲ ದೇಶ ಸಂ. : ಶ್ರೀಕಂಠತೀರ್ಥ, ಡಾ. ಎಂ. ಚಿದಾನಂದಮೂರ್ತಿ ಮತ್ತು ಇತರರು, ಬೆಂಗಳೂರು ; ೧೯೭೬, ಪು. ೨೯೧-೨೯೩.

ದೇವತೆಯಾಗಿ ಹುಟ್ಟಿ ಕಾರ್ತಿಕ ಋಷಿಯನ್ನು ರಕ್ಷಿಸಿದು ದನು ಇಲ್ಲಿ ಸ್ಮರಿಸಿಕೊಳ್ಳಬೇಕು. ಮೂರ್ತಿಯು ಕುಳಿತ ಭಂಗಿಯಲ್ಲಿದ್ದು ಎರಡು ಕೈಗಳು ಮಾತ್ರ ಇವೆ. ಬಲಗೈ ಯಲ್ಲಿ ಹೂವನ್ನು ಹಿಡಿದುಕೊಂಡಿರುವ ಹಾಗೆ ಕಾಣುತ್ತದೆ ಎಡಗೈಯಲ್ಲಿ ಹಿಡಿದಿರುವುದು ಅಸ್ಪಷ್ಟವಾಗಿದೆ.

ಅಲ್ಲದೆ ಜೋಗಿಕೊಳ್ಳವೆಂಬ ಶಬ್ದವೂ ಜಿನಧರ್ಮ ದತ್ತ ಬೆರಳು ತೋರುತ್ತಿದೆ. ಜೈನಧರ್ಮದ ಪಾರಿಭಾಷಿಕ ಪದವಾದ 'ಯಕ್ಷ' ಎಂಬುದು 'ಜಕ್ಕ' ಎಂದೂ 'ಯಕ್ಷಿ' ಎಂಬುದು 'ಜಕ್ಕಿ' ಎಂದು 'ಯಕ್ಷಿಣಿ' ಎಂಬುದು 'ಜಕ್ಕಿಣಿ' ಎಂದೂ ಪ್ರಾಕೃತದಲ್ಲೂ ತನ್ಮೂಲಕ ಕನ್ನಡದಲ್ಲೂ ವ್ಯತ್ಯಾಸ ಪಡೆದಿವೆ. ಕನ್ನಡದಲ್ಲಿ ಜಕ್ಕಲೆ, ಜಕ್ಕಿಯಬ್ಬೆ, ಜಕ್ಕಣಬ್ಬೆ ಎಂಬ ನಾಮವಾಚಕಗಳು ಪ್ರಚಾರದಲ್ಲಿವೆ. ಜೋ (ಕುಮಾರ) ಶಬ್ದಕ್ಕೂ ಇವುಗಳಿಗೂ ಸಂಬಂಧವೇನಾದರೂ ಇರಬಹುದೇ ಎಂಬುದು ಚಿಂತನೀಯ.[3] 'ಜೋಗಿ' ಮತ್ತು 'ಜೋಗಪ್ಪ' ಎಂಬಿವು (ಯಕ್ಷ> ಜಕ್ಕಿ> ಜೋಗಿ ಮತ್ತು ಯಕ್ಷ> ಜಕ್ಕ> ('ಜೋಗಪ್ಪ) ಜಕ್ಕಿ ಮತ್ತು ಜಕ್ಕ ಗಳನ್ನು ನಿರ್ದೇಶಿಸುತ್ತಿರಬೇಕು. ಕಲ್ಲಿನಿಂದ ಕಟ್ಟಲ್ಪಟ್ಟ ದೇವಾಲಯಗಳಿಗಿಂತ ಇಟ್ಟಿಗೆಯಿಂದ ಕಟ್ಟಲ್ಪಟ್ಟ ದೇವಾಲಯಗಳು ಪ್ರಾಚೀನ. ಪಾರ್ವತಿ ಮತ್ತು ಕುಮಾರ ಸ್ವಾಮಿ ದೇವಾಲಯಗಳಿಗೆ ಪೂರ್ವದಲ್ಲಿಯೇ ಈ ಬಸದಿ ನಿರ್ಮಾಣವಾಗಿರಬೇಕು. ಇಲ್ಲೊಂದು ದಿಗಂಬರ ಮೂರ್ತಿ ಇದ್ದುದನ್ನು ಸ್ಥಳೀಯರು ಹೇಳುತ್ತಿರುವುದರಿಂದ ಇದು ಕಾರ್ತೀಕ ಋಷಿಯ ಕಥೆಯಲ್ಲಿ ಬರುವ ಬಸದಿ ಇದೇ ಆಗಿರಬೇಕು. ಈ ಲೇಖನದ ಮೂಲಕ 'ವಡ್ಡಾರಾಧನೆ' ಸೂಚಿಸುವ ಬಸದಿ ವಿಷಯವಾಗಿ ಹೊಸ ನಿವೇಶನದ ಕಡೆಗೆ ವಿದ್ವಾಂಸರ ಗಮನ ಸೆಳೆಯುತ್ತಿದ್ದೇನೆ. ಇಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಸಬೇಕಾಗಿದೆ.

3 ನಾಗರಾಜಯ್ಯ, ಹಂಪ : ಯಕ್ಷ-ಯಕ್ಷಿಯರು, ಬೆಂಗಳೂರು, ಚಂದ್ರಸಾಗರವರ್ಣಿ ಗ್ರಂಥಮಾಲೆ, ೧೯೭೬